ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

ಸರ್ಕಾರಿ ನೌಕರರ ಮೇಲಿನ ಆರೋಪ/ವಿಚಾರಣೆಗಳ ಬಗ್ಗೆ

ಶ್ರೀ ಯು. ಬಿ. ವೆಂಕಟೇಶ್(ನಾಮನಿರ್ದೇಶನ ಹೊಂದಿದವರು) -

381 (238) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ನೌಕರರು ತಮ್ಮ ಸೇವಾವಧಿಯಲ್ಲಿ ಭ್ರಷ್ಟಾಚಾರದ ಆರೋಪದ ಮೇಲೆ ಅಮಾನತ್ತುಗೊಂಡ ಸಂದರ್ಭದಲ್ಲಿ, ಅವರ ಮೇಲಿನ ಆರೋಪಗಳ ಬಗ್ಗೆ ಲೋಕಾಯುಕ್ತ, ಎ. ಸಿ. ಬಿ. ಹಾಗೂ ಇಲಾಖಾ ವಿಚಾರಣಾ ಸಮಿತಿಗಳು ನಿಗದಿತ ಕಾಲಾವಧಿಯೊಳಗೆ ಪ್ರಕರಣಗಳನ್ನು ಮುಕ್ತಾಯಗೊಳಿಸಲು ಕ್ರಮ ಕೈಗೊಳ್ಳುತ್ತಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು;

(ಆ) ನೂರಾರು ಪ್ರಕರಣಗಳಲ್ಲಿ ನಿವೃತ್ತಿ ನಂತರವೂ ವಿಚಾರಣೆ ಮುಕ್ತಾಯಗೊಳ್ಳದಿರುವುದರಿಂದ, ನೌಕರರ ನಿವೃತ್ತಿ ನಂತರದ ಉಪಲಬ್ಧಗಳು ಲಭ್ಯವಾಗದಿರುವುದರಿಂದ ಆ ಕುಟುಂಬಗಳು ತೊಂದರೆಯಲ್ಲಿರುವುದನ್ನು ಸರ್ಕಾರ ಮನಗಂಡಿದೆಯೇ;

(ಇ) ಇಂತಹ ಪ್ರಕರಣಗಳ ವಿಚಾರಣೆಗಳನ್ನು ಕನಿಷ್ಠ 5 ವರ್ಷಗಳಲ್ಲಿ ಮುಕ್ತಾಯಗೊಳಿಸಬೇಕೆನ್ನುವ ಬಗ್ಗೆ ಸರ್ಕಾರ ವಿಧೇಯಕವನ್ನು ತರಲು ಚಿಂತಿಸುತ್ತದೆಯೇ?